## ಕರ್ನಾಟಕ ವಿಧಾನ ಪರಿಷತ್ತು

415 U/S

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **444** |
| ಸದಸ್ಯರ ಹೆಸರು | : | ಶ್ರೀ ಮುನಿರಾಜು ಗೌಡ ಪಿ.ಎಂ. (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | **16-12-2021** |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

16/12

****

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಅಂತರ್ಜಲ ಮಟ್ಟವನ್ನು ಸುಧಾರಿಸುವ ಕ್ರಮವಾಗಿ ಖಾಸಗಿವರಿಂದಾಗಲೀ/ ಸಾರ್ವಜನಿಕ ಸಂಸ್ಥೆಗಳಿಂದಾಗಲೀ ಕೊಳವಿ ಬಾವಿ ಕೊರಯುವ ಮುನ್ನ ಜಲಮಂಡಳಿಯಿಂದ ಕಡ್ಡಾಯವಾಗಿ ಪೂರ್ವಾನುಮತಿ ಪಡೆದುಕೊಳ್ಳಬೇಕು ಎಂಬ ನಿಯಮವು ಚಾಲ್ತಿಯಲ್ಲಿದೆಯೇ; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಖಾಸಗಿಯವರಿಂದಾಗಲೀ / ಸಾರ್ವಜನಿಕ ಸಂಸ್ಥೆಗಳಿಂದಾಗಲೀ ತಮ್ಮ ನಿವೇಶನದಲ್ಲಿ ಕೊಳವೆಬಾವಿ ಕೊರೆಯುವ ಮುನ್ನ ಜಲಮಂಡಳಿಯಿಂದ ಕಡ್ಡಾಯವಾಗಿ ಪೂರ್ವಾನುಮತಿ ಪಡೆದುಕೊಳ್ಳಬೇಕು ಎಂಬ ನಿಯಮವು ಚಾಲ್ತಿಯಲ್ಲಿದೆ.<br><br>ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮ ಹಾಗೂ ನಿಯಂತ್ರಣ) ಅಧಿನಿಯಮ 2011 ಮತ್ತು ನಿಯಮಾವಳಿ 2012ಕ್ಕೆ ಸಂಬಂಧಿಸಿದಂತೆ ಸರ್ಕಾರದ ಅಧಿಸೂಚನೆ ದಿನಾಂಕ.31.12.2012 ರಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಪ್ರಧಾನ ಇಂಜಿನಿಯರ್, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ, ಇವರ ಅಧ್ಯಕ್ಷತೆಯಲ್ಲಿ ಒಟ್ಟು 23 ಸದಸ್ಯರಿರುವ (ಬೆಸ್ಕಾಂ, ಬಿ.ಬಿ.ಎಂ.ಪಿ. ಜಿಲ್ಲಾ ಅಂತರ್ಜಲ ಪ್ರಾಧಿಕಾರ, ಪೋಲೀಸ್ ಇಲಾಖೆ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು ಜಲಮಂಡಳಿಯ ಕಾರ್ಯ ನಿರ್ವಾಹಕ ಅಭಿಯಂತರರನ್ನೊಳಗೊಂಡ) ಸಮಿತಿಯನ್ನು ರಚಿಸಲಾಗಿರುತ್ತದೆ. ಸದರಿ ಸಮಿತಿಯಲ್ಲಿ ಕೊಳವೆ ಬಾವಿ ಕೊರೆಸಲು ಸಲ್ಲಿಸುವ ಅರ್ಜಿಗಳಿಗೆ ಹಿರಿಯ ಭೂವಿಜ್ಞಾನಿ, ಜಿಲ್ಲಾ ಅಂತರ್ಜಲ ಪ್ರಾಧಿಕಾರ ರವರು ನೀಡುವ ತಾಂತ್ರಿಕ ವರದಿ ಹಾಗೂ ಜಲಮಂಡಳಿಯ ವಿಭಾಗಾಧಿಕಾರಿಗಳು ನೀಡುವ ವರದಿಯನ್ನು ತಿಂಗಳಿಗೊಮ್ಮೆ ನಡೆಯುವ ಸಭೆಯಲ್ಲಿ ಪರಿಶೀಲಿಸಿ ಕುಡಿಯುವುದಕ್ಕೆ ಮತ್ತು ಗೃಹ ಬಳಕೆಗಾಗಿ ಮಾತ್ರ ಅನುಮತಿ ನೀಡಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಸದರಿ ನಿಯಮ ಎಂದಿನಿಯಂದ ಜಾರಿಗೆ ಬಂದಿದೆ; | ಸದರಿ ನಿಯಮವು ದಿನಾಂಕ:31.12.2012 ರಿಂದ ಜಾರಿಗೆ ಬಂದಿರುತ್ತದೆ. |
| ಇ) | ಜಾರಿಗೆ ಬಂದ ದಿನಾಂಕದಿಂದ ಒಟ್ಟು ಎಷ್ಟು ಕೊಳವೆ ಬಾವಿಗಳಿಗೆ ಜಲಮಂಡಳಿಯಿಂದ ಲಿಖಿತ ರೂಪದಲ್ಲಿ ಅನುಮತಿ ನೀಡಲಾಗಿದೆ (ಅನುಮತಿ ನೀಡಿದ ದಿನಾಂಕ, ಕೊಳವೆ ಬಾವಿಗಳ ಸ್ಥಳ, ಅನುಮತಿ ಪಡೆದುಕೊಂಡ ವ್ಯಕ್ತಿ/ಸಂಸ್ಥೆಗಳ ವಿವರ ನೀಡುವುದು) | ಜಾರಿಗೆ ಬಂದ ದಿನಾಂಕದಿಂದ ಒಟ್ಟು 9430 ಕೊಳವೆ ಬಾವಿಗಳಿಗೆ ಜಲಮಂಡಳಿಯಿಂದ ಅನುಮತಿ ನೀಡಲಾಗಿರುತ್ತದೆ. (ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿರುತ್ತದೆ). |

....2)

| | | |
|---|---|---|
| ಈ) | ಕೊಳವೆಬಾವಿ ಕೊರೆಯಲು ಜಲಮಂಡಳಿಯಿಂದ ಪೂರ್ವಾನುಮತಿ ಪಡೆಯುವುದು ಕಡ್ಡಾಯವಾಗಿದ್ದರೂ ಅನುಮತಿ ಪಡೆದುಕೊಳ್ಳದೆ ಅನಧಿಕೃತವಾಗಿ ಕೊಳವೆ ಬಾವಿಗಳನ್ನು ಕೊರೆಯುವುದನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು? | ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ 2011 ಮತ್ತು ನಿಯಮಾವಳಿ 2012 ರ ನಿಯಮಾವಳಿ 32 ರ ಪ್ರಕಾರ ಅನಧಿಕೃತವಾಗಿ ಕೊಳವೆ ಬಾವಿಗಳನ್ನು ಕೊರೆಯುವುದು ಶಿಕ್ಷಾರ್ಹ ಅಪರಾಧವಾಗಿದೆ ಎಂದು ಪತ್ರಿಕಾ ಪ್ರಕಟಣೆಯನ್ನು ಹೊರಡಿಸಲಾಗಿರುತ್ತದೆ.<br><br>ಮುಂದುವರೆದು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೊಳವೆಬಾವಿಗಳ ವಿದ್ಯುತ್ ಸಂಪರ್ಕಕ್ಕಾಗಿ ಬೆಸ್ಕಾಂ ರವರಿಗೆ ಅರ್ಜಿ ಸಲ್ಲಿಸಿದಲ್ಲಿ, ಸದರಿ ಅರ್ಜಿದಾರರು ಕರ್ನಾಟಕ ಅಂತರ್ಜಲ ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮ ಹಾಗೂ ನಿಯಂತ್ರಣ ಪ್ರಾಧಿಕಾರದ ಅನುಮತಿ ಪತ್ರವನ್ನು ಪಡೆದಿರುವ ಬಗ್ಗೆ ಖಾತರಿ ಪಡಿಸಿಕೊಂಡು ವಿದ್ಯುತ್ ಸಂಪರ್ಕವನ್ನು ನೀಡಬೇಕೆಂದು ಕೋರಲಾಗಿರುತ್ತದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಅನಧಿಕೃತವಾಗಿ ಕೊಳವೆ ಬಾವಿಗಳನ್ನು ಕೊರೆಯುವುದನ್ನು ತಡೆಗಟ್ಟಲು ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮ ಹಾಗೂ ನಿಯಂತ್ರಣ) ಅಧಿನಿಯಮ 2011 ಮತ್ತು ನಿಯಮಾವಳಿ 2012 ರ ನಿಯಮಾವಳಿ 32 ಮತ್ತು 33ರ ಪ್ರಕಾರ ಜಿಲ್ಲಾ ಅಂತರ್ಜಲ ಕಛೇರಿ, ಬೆಂಗಳೂರು ರವರು ದಂಡ ವಿಧಿಸುತ್ತಿರುತ್ತಾರೆ. |

**ಸಂಖ್ಯೆ: ನಅಇ 66 ಎಂಎನ್‌ಐ 2021**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ